# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 542
ಸದಸ್ಯರ ಹೆಸರು : ಶ್ರೀ ನಸೀರ್ ಅಹ್ಮದ್ (ವಿಧಾನಸಭೆಯಿಂದ ಚುನಾಯಿತರಾದವರು)
ಉತ್ತರಿಸಬೇಕಾದ ದಿನಾಂಕ : 16.09.2021
ಉತ್ತರಿಸಬೇಕಾದ ಸಚಿವರು : ಮಾನ್ಯ ಮುಖ್ಯಮಂತ್ರಿರವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ನಿವೃತ್ತಿ ಹೊಂದಿದ ಅಧಿಕಾರಿ/ನೌಕರರನ್ನು ಯಾವ ದಿನಾಂಕದಿಂದ ಮುಂದುವರೆಸಲಾಗಿದೆ; (ಮಾಹಿತಿ ನೀಡುವುದು) | ಮಾಹಿತಿಯನ್ನು **ಅನುಬಂಧ-1** ರಲ್ಲಿ ಒದಗಿಸಿದೆ. |
| ಆ | ನಿವೃತ್ತರನ್ನು ಮುಂದುವರೆಸಿರುವುದು ಸರ್ಕಾರದ ಆದೇಶದ ವಿರುದ್ಧವಾಗಿಲ್ಲವೇ; ನಿವೃತ್ತರಿಂದಾಗುವ ಅಚಾತುರ್ಯ ಅಥವಾ ಬೇಜವಾಬ್ದಾರಿತನಗಳಿಗೆ ಸರ್ಕಾರ ಹೇಗೆ ಜವಾಬ್ದಾರಿ ನಿಗಧಿಗೊಳಿಸಲು ಸಾಧ್ಯ; (ಮಾಹಿತಿ ನೀಡುವುದು) | ಸರ್ಕಾರ ಸುತ್ತೋಲೆ ಸಂಖ್ಯೆ:ಸಿಆಸುಇ 588 ಸೇನೆನಿ 2015 ದಿನಾಂಕ:02-03-2016 ರನ್ವಯ ಮತ್ತು ಪ್ರಾಧಿಕಾರದ ಸಭೆಯ ದಿನಾಂಕ:30-05-2015 ರಲ್ಲಿ ತೀರ್ಮಾನಿಸಿರುವಂತೆ, ಪ್ರಾಧಿಕಾರದ ಕೆಲಸ ಕಾರ್ಯಗಳನ್ನು ತ್ವರಿತವಾಗಿ ಪೂರ್ಣಗೊಳಿಸಬೇಕಾಗಿರುವುದರಿಂದ ಮತ್ತು ಆಡಳಿತಾತ್ಮಕ ದೃಷ್ಟಿಯಿಂದ, ಪ್ರಾಧಿಕಾರದ ಕೆಲವು ಅತೀ ಮುಖ್ಯ ವಿಭಾಗಗಳಲ್ಲಿ ಅನುಭವ ಇರುವ ಮತ್ತು ಯಾವುದೇ ನಿರ್ದಿಷ್ಟವಾದ ಆರೋಪಗಳಾಗಲಿ, ಇಲಾಖಾ ವಿಚಾರಣೆ ಬಾಕಿ ಇಲ್ಲದೆ ಇರುವಂತಹ ನಿವೃತ್ತ ನೌಕರರನ್ನು ಮಾತ್ರ ಪ್ರಾಧಿಕಾರದ ಆರ್ಥಿಕ ಸ್ಥಿತಿಗತಿಗಳನ್ನು ಗಮನದಲ್ಲಿಟ್ಟುಕೊಂಡು ಮುಂದುವರೆಸಲು ಕ್ರಮಕೈಗೊಳ್ಳಲಾಗಿದೆ.<br><br>ಪ್ರಾಧಿಕಾರದಲ್ಲಿ ಪ್ರತಿ ತಿಂಗಳು ಸಾಕಷ್ಟು ಸಂಖ್ಯೆಯಲ್ಲಿ ನೌಕರರು ನಿವೃತ್ತಿ ಹೊಂದುತ್ತಿರುವುದರಿಂದ ಸಾಕಷ್ಟು 'ಸಿ' ಮತ್ತು 'ಡಿ' ಹುದ್ದೆಗಳು ಖಾಲಿ ಇರುತ್ತದೆ. ಯಾವುದೇ ನೇಮಕಾತಿಯನ್ನು ಮಾಡಿರುವುದಿಲ್ಲವಾದ್ದರಿಂದ ನಿರ್ದಿಷ್ಟವಾದ ಆರೋಪಗಳಾಗಲಿ, ಇಲಾಖಾ ವಿಚಾರಣೆ ಅಥವಾ ಯಾವುದೇ ವಿಚಾರಣೆಗಳು ಬಾಕಿ ಇಲ್ಲದೆ ಇರುವಂತಹ ನಿವೃತ್ತ ನೌಕರರನ್ನು ಮಾತ್ರ ಗುತ್ತಿಗೆ ಆಧಾರದ ಮೇಲೆ ನಿಯಮಿತ ಕೆಲಸಗಳಿಗೆ ಮಾತ್ರ ಮುಂದಿನ ಆದೇಶದವರೆಗೆ ತಾತ್ಕಾಲಿಕವಾಗಿ ಸಂಚಿತ ವೇತನದ ಆಧಾರದ ಮೇಲೆ ಮುಂದುವರೆಸಲಾಗಿದೆ.<br><br>ಸದರಿ ನಿವೃತ್ತ ನೌಕರರುಗಳಿಗೆ ಯಾವುದೇ ಸಹಿ ಮಾಡುವ ಅಧಿಕಾರವನ್ನು ನೀಡಲಾಗಿರುವುದಿಲ್ಲ ಹಾಗೂ ಕೇವಲ ಮೇಲಾಧಿಕಾರಿಗಳಿಗೆ ಸಹಾಯಕರಾಗಿ ಕರ್ತವ್ಯ ನಿರ್ವಹಿಸುತ್ತಿರುತ್ತಾರೆ. |
| ಇ | ಪ್ರಾಧಿಕಾರದಲ್ಲಿ ಮುಂದುವರೆದಿರುವ ನಿವೃತ್ತ ನೌಕರರನ್ನು ಕೈಬಿಡುವ ಅಥವಾ ತೆಗೆದು ಹಾಕುವ ಬಗ್ಗೆ ಕಳೆದ ಅಧಿವೇಶನದಲ್ಲಿ ಸರ್ಕಾರ ಭರವಸೆ ನೀಡಿರುವುದು ನಿಜವೇ; (ಭರವಸೆ ದಿನಾಂಕವನ್ನು ನೀಡುವುದು) | ಪ್ರಾಧಿಕಾರದಲ್ಲಿ ಮುಂದುವರೆದಿರುವ ನಿವೃತ್ತ ನೌಕರರನ್ನು ಕೈಬಿಡುವ ಅಥವಾ ತೆಗೆದು ಹಾಕುವ ಬಗ್ಗೆ ಹಿಂದಿನ ಮಾನ್ಯ ಮುಖ್ಯಮಂತ್ರಿಗಳು ದಿನಾಂಕ:19-03-2020 ರಂದು ವಿಧಾನ ಪರಿಷತ್ತಿನಲ್ಲಿ 10 ಜನ ನಿವೃತ್ತಿ ಹೊಂದಿದಂತಹ ನೌಕರರುಗಳನ್ನು ನೇಮಕ ಮಾಡಿಕೊಳ್ಳಲಾಗಿದ್ದು, ಅವರಿಗೆ ಯಾವುದೇ |

| | | |
|---|---|---|
| | ಹಾಗಿದ್ದಲ್ಲಿ, ಈವರೆಗೂ ಈ ದಿಸೆಯಲ್ಲಿ ಪ್ರಾಧಿಕಾರ ಕೈಗೊಂಡ ಕ್ರಮಗಳೇನು; | ಜವಾಬ್ದಾರಿ ಇರುವುದಿಲ್ಲವೆಂದು ಮೇಲಾಧಿಕಾರಿಗಳಿಗೆ ಸಹಾಯಕರಾಗಿ ಮಾತ್ರ ಕೆಲಸ ನಿರ್ವಹಿಸುತ್ತಿದ್ದು ನಾನು ಮಾಡಿರುವ ನೇಮಕಾತಿಯಲ್ಲವೆಂದು, ಹಿಂದೆ ಆಗಿರುವುದು ಬೇಕಾದರೆ ಅದನ್ನು ಕೈಬಿಡೋಣವೆಂದು ಉತ್ತರಿಸಿರುತ್ತಾರೆ.<br><br>ಈ ಹಿಂದೆ ಸಲ್ಲಿಸಿದ್ದ **ಅನುಬಂಧ-1** ರಲ್ಲಿನ 19 ಜನ ಅಧಿಕಾರಿ/ನೌಕರರಲ್ಲಿ ಈಗಾಗಲೇ 11 ಜನ ನೌಕರರುಗಳ ಸೇವೆಯನ್ನು ಸಮಾಪ್ತಿಗೊಳಿಸಲಾಗಿದೆ. (ಇದನ್ನು **ಅನುಬಂಧ-2** ರಲ್ಲಿ ಒದಗಿಸಿದೆ) ಮುಂದುವರೆದು ಬಾಕಿ 08 ನೌಕರರುಗಳ ಸೇವೆಯನ್ನು ಮುಂದುವರೆಸಿರುವುದರ ಜೊತೆಗೆ ಪ್ರಾಧಿಕಾರದಲ್ಲಿ 'ಸಿ' ಮತ್ತು 'ಡಿ' ಗುಂಪು ನೌಕರರ ತೀವ್ರ ಕೊರತೆ ಇರುವುದರಿಂದ ಹೊಸದಾಗಿ 08 ಗ್ರೂಪ್-ಡಿ ನೌಕರರುಗಳನ್ನು ಮತ್ತು 01 ಗುಂಪು-ಸಿ ನೌಕರರನ್ನು (ಬೆರಳಚ್ಚುಗಾರ್ತಿ) ಸಂಚಿತ ವೇತನ ಆಧಾರದ ಮೇಲೆ ನೇಮಕಾತಿ ಮಾಡಲಾಗಿದೆ. |
| ಈ | ಇಂತಹವುಗಳನ್ನು ತಪ್ಪಿಸಿ ಅನೇಕ ವರ್ಷಗಳಿಂದ ಅನುಕಂಪದ ಆಧಾರದ ಮೇಲೆ ಉದ್ಯೋಗ ಬಯಸಿ ಅರ್ಜಿ ಸಲ್ಲಿಸಿದವರನ್ನು ಪರಿಗಣಿಸಲು ಅಥವಾ ನೇಮಕಾತಿ ಪ್ರಕ್ರಿಯೆಗಳನ್ನು ಕೈಗೊಳ್ಳಲು ಇರುವ ತೊಂದರೆಗಳೇನು; ಈ ಬಗ್ಗೆ ಸರ್ಕಾರ ಕೈಗೊಳ್ಳಲಿರುವ ಕ್ರಮಗಳೇನು; | ಪ್ರಾಧಿಕಾರದಲ್ಲಿ ಅನೇಕ ವರ್ಷಗಳಿಂದ ಅನುಕಂಪದ ಆಧಾರದ ಮೇಲೆ ಉದ್ಯೋಗ ಬಯಸಿ ಅರ್ಜಿ ಸಲ್ಲಿಸಿದವರುಗಳ ಪೈಕಿ, ಅನುಕಂಪದ ಆಧಾರದ ಮೇಲೆ ನೇಮಕಾತಿ ನಿಯಮಗಳು 1996 ರನ್ವಯ ನಿಯಮಾನುಸಾರ ಅರ್ಹರಿರುವ ಎಲ್ಲಾ ಅರ್ಜಿದಾರರುಗಳಿಗೆ ನೇಮಕಾತಿ ಆದೇಶ ಹೊರಡಿಸಲಾಗಿರುತ್ತದೆ. ಅದರಂತೆ ಅನುಕಂಪದ ಆಧಾರದ ಮೇಲೆ ನೇಮಕಾತಿ ಹೊಂದಿರುವ ಎಲ್ಲರು ಹಾಲಿ ಕರ್ತವ್ಯ ನಿರ್ವಹಿಸುತ್ತಿರುತ್ತಾರೆ. |

ನಅಇ 211 ಬೆಂಆಸೇ 2021

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

ಅನುಬಂಧ -1

## ಪ್ರಾಧಿಕಾರದಲ್ಲಿ ಗುತ್ತಿಗೆ/ಸಂಚಿತ ವೇತನ ಆಧಾರದ ಮೇಲೆ ನೇಮಕಾತಿಗೊಂಡು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ನಿವೃತ್ತ ನೌಕರರುಗಳ ಪಟ್ಟಿ

## ಅನುಬಂಧ-1

| ಕ್ರ.ಸಂ. | ಹೆಸರು ಶ್ರೀ/ಶ್ರೀಮತಿ | ಹುದ್ದೆ | ನಿವೃತ್ತಿ ಹೊಂದಿದ ದಿನಾಂಕ | ಗುತ್ತಿಗೆ ಮೇಲೆ ಪ್ರಾಧಿಕಾರದಲ್ಲಿ ಕೆಲಸದ ಮೇಲೆ ಹಾಜರಾದ ದಿನಾಂಕ |
|---|---|---|---|---|
| 1. | ಪುಟ್ಟಸ್ವಾಮಿ, (ನಿವೃತ್ತ) | 'ಡಿ' ಗ್ರೂಪ್ | 30-04-2019 | 01-05-2019 |
| 2. | ಸಂಪತ್ ಕುಮಾರ್ (ನಿವೃತ್ತ) | ಮೇಲ್ವಿಚಾರಕರು | 31-07-2019 | 01-08-2019 |
| 3. | ಸುಬ್ಬರಾವ್ (ನಿವೃತ್ತ) | ಮೇಲ್ವಿಚಾರಕರು | 31-12-2019 | 02-01-2020 |
| 4. | ಮಂಜುನಾಥ್.ವಿ (ನಿವೃತ್ತ) | ಮೇಲ್ವಿಚಾರಕರು | 30-04-2019 | 01-01-2020 |
| 5. | ವೀರಶೆಟ್ಟಿ (ನಿವೃತ್ತ) | 'ಡಿ' ಗ್ರೂಪ್ | 31-05-2019 | 24-01-2020 |
| 6. | ರಂಗಪ್ಪ (ನಿವೃತ್ತ) | 'ಡಿ' ಗ್ರೂಪ್ | 31-03-2020 | 24-04-2020 |
| 7. | ಶಿವಲಿಂಗೇಗೌಡ (ನಿವೃತ್ತ) | 'ಡಿ' ಗ್ರೂಪ್ | 31-05-2020 | 10-07-2020 |
| 8. | ಲಿಂಗಯ್ಯ, (ನಿವೃತ್ತ) | 'ಡಿ' ಗ್ರೂಪ್ | 31-03-2019 | 10-07-2020 |
| 9. | ಕೆಂಪರಾಜಮ್ಮ, (ನಿವೃತ್ತ) | ಬೆರಳಚ್ಚುಗಾರ್ತಿ. | 31-12-2020 | 23-07-2021 |
| 10. | ಪುಟ್ಟಯ್ಯ, (ನಿವೃತ್ತ) | 'ಡಿ' ಗ್ರೂಪ್ | 31-10-2017 | 18-03-2021 |
| 11. | ಚಿಕ್ಕಸ್ವಾಮಿ. (ನಿವೃತ್ತ) | 'ಡಿ' ಗ್ರೂಪ್ | 31-07-2019 | 18-03-2021 |
| 12. | ರಾಮಯ್ಯ, (ನಿವೃತ್ತ) | 'ಡಿ' ಗ್ರೂಪ್ | 31-08-2018 | 18-03-2021 |
| 13. | ಜಿ.ಕೃಷ್ಣಯ್ಯ, (ನಿವೃತ್ತ) | 'ಡಿ' ಗ್ರೂಪ್ | 28-02-2008 | 18-03-2021 |
| 14. | ಗೋವಿಂದಪ್ಪ, (ನಿವೃತ್ತ) | 'ಡಿ' ಗ್ರೂಪ್ | 30-05-2018 | 18-03-2021 |
| 15. | ರಾಮ್ ಬಹದ್ದೂರ್, (ನಿವೃತ್ತ) | 'ಡಿ' ಗ್ರೂಪ್ | 31-12-2020 | 18-03-2021 |
| 16. | ಶ್ಯಾಮ್ ಬಹದ್ದೂರ್, (ನಿವೃತ್ತ) | 'ಡಿ' ಗ್ರೂಪ್ | 30-04-2019 | 18-03-2021 |
| 17. | ವೆಂಕಟಯ್ಯ, (ನಿವೃತ್ತ) | 'ಡಿ' ಗ್ರೂಪ್ | 31-03-2021 | 01-04-2021 |

for ಉಪ ಕಾರ್ಯದರ್ಶಿ - 1 (ಆಡಳಿತ)
ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ
ಬೆಂಗಳೂರು.

ಅನುಬಂಧ - ೩

ಪ್ರಾಧಿಕಾರದಲ್ಲಿ ಗುತ್ತಿಗೆ/ಸಂಚಿತ ವೇತನ ಆಧಾರದ ಮೇಲೆ ಈ ಹಿಂದ ಕಾರ್ಯನಿರ್ವಹಿಸುತ್ತಿದ್ದ ನಿವೃತ್ತ ನೌಕರರುಗಳನ್ನು ಸೇವೆಯಿಂದ ಸಮಾಪ್ತಿಗೊಳಿಸಿರುವ ಪಟ್ಟಿ

## ಅನುಬಂಧ-2

| ಕ್ರ.ಸಂ. | ಹೆಸರು ಶ್ರೀ/ಶ್ರೀಮತಿ | ಹುದ್ದೆ/ವಿಭಾಗ | ನಿವೃತ್ತಿ ಹೊಂದಿದ ದಿನಾಂಕ | ಗುತ್ತಿಗೆ ಮೇಲೆ ಪ್ರಾಧಿಕಾರದಲ್ಲಿ ಕೆಲಸದ ಮೇಲೆ ಹಾಜರಾದ ದಿನಾಂಕ | ಷರಾ |
|---|---|---|---|---|---|
| 1. | ಬಸವರಾಜಪ್ಪ (ನಿವೃತ್ತ) | ಆರ್ಥಿಕ ವಿಭಾಗ | 30-04-2015 | 04-07-2016 | ಸೇವೆಯನ್ನು ಸಮಾಪ್ತಿಗೊಳಿಸಲಾಗಿರುತ್ತದೆ |
| 2. | ವಲೇರಿಯನ್ ಫರ್ನಾಂಡಿಸ್ (ನಿವೃತ್ತ) | ಆರ್ಥಿಕ ವಿಭಾಗ | 31-10-2013 | 06-11-2013 | ಸೇವೆಯನ್ನು ಸಮಾಪ್ತಿಗೊಳಿಸಲಾಗಿರುತ್ತದೆ |
| 3. | ಶ್ರೀಪಾದರಾಜು. (ನಿವೃತ್ತ) | ಸ.ಕಾ.ಇ., ಸ.ಕಾ.ಇಂ., (ವಾಹನ) ವಿಭಾಗ | 31-07-2012 | 18-08-2012 | ಸೇವೆಯನ್ನು ಸಮಾಪ್ತಿಗೊಳಿಸಲಾಗಿರುತ್ತದೆ |
| 4 | ಸತ್ಯನಾರಾಯಣ ರಾವ್ (ನಿವೃತ್ತ) | ಮೇಲ್ವಿಚಾರಕರು ಅಭಿಯಂತರ ಸದಸ್ಯರ ಆಪ್ತ ವಿಭಾಗ | 31-12-2019 | 01-02-2020 | ಸೇವೆಯನ್ನು ಸಮಾಪ್ತಿಗೊಳಿಸಲಾಗಿರುತ್ತದೆ |
| 5 | ಮರದಪ್ಪ (ನಿವೃತ್ತ) | ಅಕೌಂಟ್ ಆಫೀಸರ್ ಆರ್ಥಿಕ ವಿಭಾಗ | 31-08-2014 | 30-04-2020 | ಸೇವೆಯನ್ನು ಸಮಾಪ್ತಿಗೊಳಿಸಲಾಗಿರುತ್ತದೆ |
| 6. | ಪಾರ್ವತಮ್ಮ (ನಿವೃತ್ತ) | 'ಡಿ' ಗ್ರೂಪ್ ಅಭಿಯಂತರ ಸದಸ್ಯರ ವಿಭಾಗ | 30-04-2016 | 04-05-2020 | ಸೇವೆಯನ್ನು ಸಮಾಪ್ತಿಗೊಳಿಸಲಾಗಿರುತ್ತದೆ |
| 7. | ವಾಸುದೇವರಾಜು (ನಿವೃತ್ತ) | 'ಡಿ' ಗ್ರೂಪ್ ಅಭಿಯಂತರ ಸದಸ್ಯರ ವಿಭಾಗ | 31-03-2020 | 04-05-2020 | ಸೇವೆಯನ್ನು ಸಮಾಪ್ತಿಗೊಳಿಸಲಾಗಿರುತ್ತದೆ |
| 8. | ರಂಗಪ್ಪ (ನಿವೃತ್ತ) | 'ಡಿ' ಗ್ರೂಪ್ ನಗರ ಯೋಜಕ ಸದಸ್ಯರ ವಿಭಾಗ | 31-03-2020 | 24-04-2020 | ಸೇವೆಯನ್ನು ಸಮಾಪ್ತಿಗೊಳಿಸಲಾಗಿರುತ್ತದೆ |
| 9. | ಶಿವಲಿಂಗೇಗೌಡ (ನಿವೃತ್ತ) | 'ಡಿ' ಗ್ರೂಪ್ ಕಾರ್ಯದರ್ಶಿಯವರ ಆಪ್ತ ವಿಭಾಗ | 31-05-2020 | 10-07-2020 | ಸೇವೆಯನ್ನು ಸಮಾಪ್ತಿಗೊಳಿಸಲಾಗಿರುತ್ತದೆ |
| 10. | ಲಿಂಗಯ್ಯ (ನಿವೃತ್ತ) | 'ಡಿ' ಗ್ರೂಪ್ ಕಾರ್ಯದರ್ಶಿಯವರ ಆಪ್ತ ವಿಭಾಗ | 31-03-2019 | 10-07-2020 | ಸೇವೆಯನ್ನು ಸಮಾಪ್ತಿಗೊಳಿಸಲಾಗಿರುತ್ತದೆ |
| 11. | ಕೆ.ಎಸ್.ಶಂಕರ್ (ನಿವೃತ್ತ) | ಸಿಬ್ಬಂದಿ ವಿಭಾಗದ ಕೆಲಸ ಕಾರ್ಯಗಳು | 31-10-2019 | 02-11-2019 | ಸೇವೆಯನ್ನು ಸಮಾಪ್ತಿಗೊಳಿಸಲಾಗಿರುತ್ತದೆ |

for

ಉಪ ಕಾರ್ಯದರ್ಶಿ - 1 (ಸಿಬ್ಬಂದಿ)
ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ
ಬೆಂಗಳೂರು